RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಡಿಸೆಂಬರ್ ೫, ೨೦೧೩ (ಮಾರ್ಗಶಿರ ೧೪, ಶಕ ವರ್ಷ ೧೯೩೫)<br>Bangalore, Thursday, December 5, 2013 (Margashira 14, Shaka Varsha 1935) | ಸಂಚಿಕೆ ೪೮<br>Issue 48 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಕೇಂದ್ರ ಕಛೇರಿ, ಹುಬ್ಬಳ್ಳಿ

**ಸುತ್ತೋಲೆ**

**ಸಂಖ್ಯೆ: ವಾಕರಸಾ/ಕೇಕ/ಹು/ಸಿಬ್ಬಂದಿ/1678, ದಿನಾಂಕ: 22ನೇ ಜುಲೈ, 2013**

**ಉಲ್ಲೇಖ** : 1) ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 548 ಎಸ್‌ಎಎಸ್ 2013, ದಿನಾಂಕ: 17–07–2013

2) ಸಂಖ್ಯೆ : ಸಾರಿಇ 17 ವಾಈಸೇ 2013, ದಿನಾಂಕ: 18–07–2013

ಸರ್ಕಾರದ ಉಲ್ಲೇಖಿತ ಅಧಿಸೂಚನೆಗಳ ಮೇರೆಗೆ, ನಾನು ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಕೇಂದ್ರ ಕಛೇರಿ, ಹುಬ್ಬಳ್ಳಿಯಲ್ಲಿ ದಿನಾಂಕ: 22–07–2013ರಂದು ವ್ಯವಸ್ಥಾಪಕ ನಿರ್ದೇಶಕ ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಂಡಿರುತ್ತೇನೆ.

ನನ್ನ ಕಾರ್ಯವ್ಯಾಪ್ತಿಗೆ ಸಂಬಂಧಿಸಿದ ಎಲ್ಲಾ ಗೌಪ್ಯ ಹಾಗೂ ಅರೆ ಸರ್ಕಾರಿ ಪತ್ರಗಳನ್ನು ಈ ಕೆಳಕಂಡ ವಿಳಾಸಕ್ಕೆ ಕಳುಹಿಸಲು ಕೋರುತ್ತೇನೆ.

**ಶ್ರೀಮತಿ ಖುಷ್ಬೂ ಗೋಯೆಲ್ ಚೌಧರಿ,** ಭಾ.ಆ.ಸೇ.
ವ್ಯವಸ್ಥಾಪಕ ನಿರ್ದೇಶಕರು,
ವಾ.ಕ.ರ.ಸಾ. ಸಂಸ್ಥೆ, ಕೇಂದ್ರ ಕಛೇರಿ,
ಗೋಕುಲ ರಸ್ತೆ, ಹುಬ್ಬಳ್ಳಿ–580 030

ದೂರವಾಣಿ :

| | | |
|---|---|---|
| ಕಛೇರಿ ದೂರವಾಣಿ | : | 0836–2333058 |
| ಮೊಬೈಲ್ ಸಂಖ್ಯೆ | : | 77609–91999 |
| ಫ್ಯಾಕ್ಸ್ ಸಂಖ್ಯೆ | : | 0836–2332103 |
| ಇ–ಮೇಲ್ | : | nwkrtcmd@gmail.com/md@nwkrtc.in |

**ಖುಷ್ಬೂ ಗೋಯೆಲ್ ಚೌಧರಿ,**
ವ್ಯವಸ್ಥಾಪಕ ನಿರ್ದೇಶಕರು,
ವಾಯುವ್ಯ ಕರ್ನಾಟಕ ಸಾರಿಗೆ ಸಂಸ್ಥೆ, ಹುಬ್ಬಳ್ಳಿ

**P.D. 127**
**SC - 5**

### ಸಮಾಜ ಕಲ್ಯಾಣ ಸಚಿವಾಲಯ

**ಅಧಿಕೃತ ಜ್ಞಾಪನ**

**ಸಂಖ್ಯೆ: ಸಕಇ 270 ಪಕಸೇ 2013, ಬೆಂಗಳೂರು, ದಿನಾಂಕ: 6ನೇ ಆಗಸ್ಟ್, 2013**

**ವಿಷಯ :–** ಸಮಾಜ ಕಲ್ಯಾಣ ಇಲಾಖೆಯ ಉಪ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತೆ (ದಿನಾಂಕ: 01–01–2013ರಲ್ಲಿದ್ದಂತೆ) ಪ್ರಕಟಿಸುವ ಬಗ್ಗೆ.

ಸಮಾಜ ಕಲ್ಯಾಣ ಇಲಾಖೆಯ ಉಪ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01–01–2013ರಲ್ಲಿದ್ದಂತೆ ಇದಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನೀಡಲಾಗಿದೆ. ಸದರಿ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ನಮೂದಿಸಿರುವ ಯಾವುದೇ ಅಂಶಗಳ ಕುರಿತಂತೆ ಸಲಹೆ/ಆಕ್ಷೇಪಣೆಗಳಿದ್ದಲ್ಲಿ ಸಂಬಂಧಪಟ್ಟ ಅಧಿಕಾರಿಗಳು ಲಿಖಿತ ಮೂಲಕ ಈ ಅಧಿಕೃತ ಜ್ಞಾಪನವನ್ನು ಪ್ರಕಟಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ, ಕೊಠಡಿ ಸಂಖ್ಯೆ: 229, 2ನೇ ಮಹಡಿ, ವಿಕಾಸಸೌಧ, ಡಾ॥ ಬಿ.ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು–560 001 ಇವರಿಗೆ ಸಲ್ಲಿಸತಕ್ಕದ್ದು. ಉಲ್ಲೇಖಿತ ಅವಧಿಯ ನಂತರ ಸ್ವೀಕರಿಸುವ ಯಾವುದೇ ಸಲಹೆ /ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಸಿದ್ದಿಕ್ ಪಾಷ,**
ಸರ್ಕಾರದ ಅಧೀನ ಕಾರ್ಯದರ್ಶಿ–1,
ಸಮಾಜ ಕಲ್ಯಾಣ ಇಲಾಖೆ

**ಅನುಬಂಧ**

ದಿನಾಂಕ: 01–01–2013ರಲ್ಲಿದ್ದಂತೆ ಸಮಾಜ ಕಲ್ಯಾಣ ಇಲಾಖೆಯ ಉಪ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ

| ಕ್ರಮ ಸಂಖ್ಯೆ | ಹೆಸರು ಶ್ರೀ/ಶ್ರೀಮತಿ | ನೇರ ನೇಮಕಾತಿ/ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|
| 1. | ಕೆ.ಆರ್. ಮೋಹನ್ | ಮುಂಬಡ್ತಿ | 03–03–1955 | 17–04–1990 | 06–10–1999 | 06–10–1999 |
| 2. | ಎನ್. ಬಿ. ಬಳಿಗಾರ್ | ಮುಂಬಡ್ತಿ | 23–07–1956 | 23–02–1987 | 31–01–2011 | 31–01–2011 |
| 3. | ಎಂ.ಎನ್. ಪದ್ಮ | ಮುಂಬಡ್ತಿ | 08–09–1959 | 08–08–1991 | 17–10–2003 | 17–10–2003 |
| 4. | ಡಾ॥ ವಿ. ಸೌಂದರ್‌ರಾಜ್ | ಮುಂಬಡ್ತಿ | 08–06–1959 | 20–03–1993 | 30–03–2010 | 30–03–2010 |
| 5. | ಡಿಗ್ಗೆ ಶಿವಾಜಿ | ಮುಂಬಡ್ತಿ | 01–06–1958 | 20–03–1993 | 30–03–2010 | 30–03–2010 |
| 6. | ಆರ್. ಸತ್ಯಶ್ರೀ | ಮುಂಬಡ್ತಿ | 11–04–1969 | 20–05–1997 | 30–03–2010 | 30–03–2010 |
| 7. | ಡಾ॥ ಎಂ.ಸಿ. ಶ್ರೀನಿವಾಸ | ಮುಂಬಡ್ತಿ | 18–10–1956 | 20–05–1997 | 30–03–2010 | 30–03–2010 |
| 8. | ಪಿ. ನಾಗೇಶ್ | ಮುಂಬಡ್ತಿ | 01–06–1974 | 19–06–2002 | 08–09–2011 | 08–09–2011 |
| 9. | ಬಿ. ಊರ್ಮಿಳ | ಮುಂಬಡ್ತಿ | 25–06–1973 | 01–04–2006 | 08–09–2011 | 08–09–2011 |
| 10. | ಚಂದ್ರನಾಯಕ್ ಯು. | ಮುಂಬಡ್ತಿ | 01–06–1970 | 01–04–2006 | 08–09–2011 | 08–09–2011 |
| 11. | ಗಣೇಶಪ್ಪ ಎಂ. | ಮುಂಬಡ್ತಿ | 01–08–1972 | 01–04–2006 | 08–09–2011 | 08–09–2011 |

**ಸಿದ್ದಿಕ್ ಪಾಷ,**
ಸರ್ಕಾರದ ಅಧೀನ ಕಾರ್ಯದರ್ಶಿ–1,
ಸಮಾಜ ಕಲ್ಯಾಣ ಇಲಾಖೆ

**P.R. 2315**
**SC - 250**

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ**

**ಬಸವ ಭವನ, ಹೈ ಗ್ರೌಂಡ್ಸ್, ಬೆಂಗಳೂರು – 560 001**

**ಪ್ರಕಟಣೆ**

**ಸಂಖ್ಯೆ: ಕರಾಆಃಆಡಳಿತಃ35ಃ2013, ದಿನಾಂಕಃ 06ನೇ ಸೆಪ್ಟೆಂಬರ್, 2013**

**ವಿಷಯ :–** ಗ್ರಾಹಕ ಸಂರಕ್ಷಣಾ ಕಾಯ್ದೆ 1986 ರ ಕಲಂ 10(1ಎ) ರಡಿಯಲ್ಲಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರ ಆಯ್ಕೆ ಬಗ್ಗೆ.

ಗ್ರಾಹಕ ಸಂರಕ್ಷಣಾ ಕಾಯ್ದೆ 1986 ರ ಕಲಂ 9(ಎ) ರನ್ವಯ ರಚಿತವಾಗಿರುವ **ಉಡುಪಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರ ಸ್ಥಾನವು ದಿನಾಂಕ 16.10.2013 ರಿಂದ ಖಾಲಿಯಾಗುವುದಿದ್ದು,** ಸದರಿ ಅಧ್ಯಕ್ಷರ ಸ್ಥಾನಕ್ಕೆ ಸೂಕ್ತರಾದವರನ್ನು ಆಯ್ಕೆ ಮಾಡುವ ಸಲುವಾಗಿ ನಿಗದಿತ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಗ್ರಾಹಕ ಸಂರಕ್ಷಣಾ ಕಾಯ್ದೆ 1986 ರ ಕಲಂ 10(1ಎ)ರನ್ವಯ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರ ಹುದ್ದೆಗೆ ಅರ್ಹರಾಗಿರುವಂತಹ ಅಭ್ಯರ್ಥಿಯು ಜಿಲ್ಲಾ ನ್ಯಾಯಾಧೀಶರ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಥವಾ ಕಾರ್ಯನಿರ್ವಹಿಸಿರುವವರು ಅಥವಾ ಜಿಲ್ಲಾ ನ್ಯಾಯಾಧೀಶರಾಗಿ ಆಯ್ಕೆ ಹೊಂದಲು ಅರ್ಹರಿರುವಂತಹವರಾಗಿರಬೇಕು.

ಮೇಲಿನ ಅರ್ಹತೆಯನ್ನು ಹೊಂದಿರುವಂತಹ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯಲ್ಲಿ ಉಡುಪಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರ ಹುದ್ದೆಗೆ ಅರ್ಜಿ ಎಂದು ಸ್ಪಷ್ಟವಾಗಿ ನಮೂದಿಸಿ, ಪೂರ್ಣವಾಗಿ ಭರ್ತಿ ಮಾಡಿರುವ ನಿಗದಿತ ಅರ್ಜಿ ನಮೂನೆಯನ್ನು ಹಾಗೂ

ಅದರೊಂದಿಗೆ ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಲಕೋಟೆಯಲ್ಲಿರಿಸಿ, ಲಕೋಟೆಯ ಮೇಲ್ಭಾಗದಲ್ಲಿಯೂ ಸಹ ಉಡುಪಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರ ಹುದ್ದೆಗೆ ಅರ್ಜಿ ಎಂದು ದಪ್ಪ ಅಕ್ಷರಗಳಲ್ಲಿ ಬರೆದು, ದಿನಾಂಕ 07.10.2013 ರಂದು ಸೋಮವಾರ ಸಂಜೆ 5–00 ಘಂಟೆಯೊಳಗಾಗಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗೌಂಡ್ಸ್, ಬೆಂಗಳೂರು 560001 ಇಲ್ಲಿಗೆ ತಲುಪುವಂತೆ ಸಲ್ಲಿಸುವುದು.

ನಿಗಧಿತ ದಿನಾಂಕ ಹಾಗೂ ಸಮಯದ ನಂತರ ಬರುವಂತಹ ಯಾವುದೇ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ. ನಿಗಧಿತ ಅರ್ಜಿ ನಮೂನೆಯು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ವೆಬ್‌ಸೈಟ್ http://kscdrc.kar.nic.in ನಲ್ಲಿ ಲಭ್ಯವಿದ್ದು, ಸಂಬಂಧಪಟ್ಟ ಅರ್ಹ ಅಭ್ಯರ್ಥಿಗಳು ವೆಬ್‌ಸೈಟಿನಿಂದ ಅರ್ಜಿ ನಮೂನೆಯನ್ನು ನೇರವಾಗಿ ಪಡೆದುಕೊಳ್ಳಬಹುದಾಗಿದೆ ಅಥವಾ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ/ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯಲ್ಲಿ ಒಂದು ಅರ್ಜಿಗೆ ರೂ. 10–00 ರಂತೆ ಶುಲ್ಕವನ್ನು ಪಾವತಿ ಮಾಡಿ ನಿಗಧಿತ ಅರ್ಜಿ ನಮೂನೆಯನ್ನು ಪಡೆದುಕೊಳ್ಳಬಹುದಾಗಿರುತ್ತದೆ.

**ನ್ಯಾಯಮೂರ್ತಿ ಕೆ. ರಾಮಣ್ಣ,**
ಅಧ್ಯಕ್ಷರು,
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ**
**ಬಸವ ಭವನ, ಹೈ ಗ್ರೌಂಡ್ಸ್, ಬೆಂಗಳೂರು – 560 001**

**ಪ್ರಕಟಣೆ**

**ಸಂಖ್ಯೆಃ ಕರಾಆಃಆಡಳಿತಃ36ಃ2013, ದಿನಾಂಕಃ 06ನೇ ಸೆಪ್ಟೆಂಬರ್, 2013**

**ವಿಷಯ :– ಗ್ರಾಹಕ ಸಂರಕ್ಷಣಾ ಕಾಯ್ದೆ 1986 ರ ಕಲಂ 10(1ಎ) ರಡಿಯಲ್ಲಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ/ಮಹಿಳಾ ಸದಸ್ಯರ ಆಯ್ಕೆ ಬಗ್ಗೆ.**

ಗ್ರಾಹಕ ಸಂರಕ್ಷಣಾ ಕಾಯ್ದೆ 1986 ರ ಕಲಂ 9(ಎ) ರನ್ವಯ ರಚಿತವಾಗಿರುವ ಈ ಕೆಳಕಂಡ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳ ಸದಸ್ಯರ/ಮಹಿಳಾ ಸದಸ್ಯರ ಸ್ಥಾನಕ್ಕೆ ಸೂಕ್ತರಾದವರನ್ನು ಆಯ್ಕೆ ಮಾಡುವ ಸಲುವಾಗಿ ನಿಗದಿತ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಹೆಸರು | ಹುದ್ದೆ ಖಾಲಿ ಇರುವ/ಖಾಲಿಯಾಗುವ ದಿನಾಂಕ |
|---|---|---|---|
| 01 | ಸದಸ್ಯರು | ಬೆಂಗಳೂರು ನಗರ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 25.09.2013 |
| 02 | ಸದಸ್ಯರು | ಬೆಂಗಳೂರು ನಗರ 3ನೇ ಹೆಚ್ಚುವರಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 02.12.2013 |
| 03 | ಸದಸ್ಯರು | ಚಾಮರಾಜನಗರ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 27.09.2013 |
| 04 | ಮಹಿಳಾ ಸದಸ್ಯರು | ಗದಗ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 15.09.2013 |
| 05 | ಸದಸ್ಯರು | ಗದಗ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | ಖಾಲಿ ಇರುವ ಹುದ್ದೆಗೆ |
| 06 | ಮಹಿಳಾ ಸದಸ್ಯರು | ಕೊಪ್ಪಳ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 10.12.2013 ಅಪರಾಹ್ನ |
| 07 | ಸದಸ್ಯರು | ಕೊಪ್ಪಳ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 10.12.2013 ಅಪರಾಹ್ನ |

ಗ್ರಾಹಕ ಸಂರಕ್ಷಣಾ ಕಾಯ್ದೆ 1986 ರ ಕಲಂ 10(1ಬಿ)

(i) ರ ಅನ್ವಯ ಅರ್ಜಿ ಸಲ್ಲಿಸಲು ಅಭ್ಯರ್ಥಿಗೆ ಕನಿಷ್ಠ 35 ವರ್ಷ ವಯಸ್ಸಾಗಿರತಕ್ಕದ್ದು.

(ii) ರ ಅನ್ವಯ ಅಭ್ಯರ್ಥಿಯು ಯಾವುದಾದರೂ ಅಂಗೀಕೃತ ವಿಶ್ವವಿದ್ಯಾಲಯದ ಪದವೀಧರರಾಗಿರಬೇಕು.

(iii) ರ ಅನ್ವಯ ಅಭ್ಯರ್ಥಿಯು ನ್ಯಾಯ, ನಿಷ್ಠೆ ಮತ್ತು ಪ್ರಾಮಾಣಿಕತೆಯನ್ನು ಹೊಂದಿರುವುದರ ಜೊತೆಗೆ ಕಾನೂನು, ಹಣಕಾಸು, ವಾಣಿಜ್ಯ, ಲೆಕ್ಕ, ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳು ಮತ್ತು ಸಾರ್ವಜನಿಕ ಆಡಳಿತ ಈ ಕ್ಷೇತ್ರಗಳಲ್ಲಿ ಕನಿಷ್ಠ ಹತ್ತು ವರ್ಷಗಳ ಅನುಭವ ಹೊಂದಿರಬೇಕು.

ಮೇಲಿನ ಅರ್ಹತೆಯನ್ನು ಹೊಂದಿರುವಂತಹ ಅಭ್ಯರ್ಥಿಗಳು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರು/ಮಹಿಳಾ ಸದಸ್ಯರಾಗಲು ಅರ್ಹರಿರುತ್ತಾರೆ. ಅರ್ಹ ಅಭ್ಯರ್ಥಿಗಳು ಆಯ್ಕೆ ಬಯಸಿರುವ ಹುದ್ದೆ ಹಾಗೂ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಹೆಸರನ್ನು ನಿಗಧಿತ ಅರ್ಜಿ ನಮೂನೆಯಲ್ಲಿ ಸ್ಪಷ್ಟವಾಗಿ ನಮೂದಿಸಿ, ಭರ್ತಿ ಮಾಡಿರುವ ನಿಗಧಿತ ಅರ್ಜಿ ನಮೂನೆಯನ್ನು ಹಾಗೂ ಅದರೊಂದಿಗೆ ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಲಕೋಟೆಯಲ್ಲಿರಿಸಿ, ಲಕೋಟೆಯ ಮೇಲ್ಭಾಗದಲ್ಲಿಯೂ ಸಹ ಆಯ್ಕೆ ಬಯಸಿರುವ ಹುದ್ದೆ ಹಾಗೂ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಹೆಸರನ್ನು ದಪ್ಪ ಅಕ್ಷರಗಳಲ್ಲಿ ಬರೆದು, ದಿನಾಂಕ 07.10.2013 ರಂದು ಸೋಮವಾರ ಸಂಜೆ 5–00ಘಂಟೆಯೊಳಗಾಗಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗೌಂಡ್ಸ್, ಬೆಂಗಳೂರು 560001 ಇಲ್ಲಿಗೆ ಸಲ್ಲಿಸುವುದು.

ನಿಗಧಿತ ದಿನಾಂಕ ಹಾಗೂ ಸಮಯದ ನಂತರ ಬರುವಂತಹ ಯಾವುದೇ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ. ನಿಗಧಿತ ಅರ್ಜಿ ನಮೂನೆಯು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ವೆಬ್‌ಸೈಟ್ http://kscdrc.kar.nic.in ನಲ್ಲಿ ಲಭ್ಯವಿದ್ದು, ಸಂಬಂಧಪಟ್ಟ ಅರ್ಹ ಅಭ್ಯರ್ಥಿಗಳು

ವೆಬ್‌ಸೈಟಿನಿಂದ ಅರ್ಜಿ ನಮೂನೆಯನ್ನು ನೇರವಾಗಿ ಪಡೆದುಕೊಳ್ಳಬಹುದಾಗಿದೆ ಅಥವಾ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ/ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯಲ್ಲಿ ಒಂದು ಅರ್ಜಿಗೆ ರೂ.10-00 ರಂತೆ ಶುಲ್ಕವನ್ನು ಪಾವತಿ ಮಾಡಿ ನಿಗಧಿತ ಅರ್ಜಿ ನಮೂನೆಯನ್ನು ಪಡೆದುಕೊಳ್ಳಬಹುದಾಗಿರುತ್ತದೆ.

**ನ್ಯಾಯಮೂರ್ತಿ ಕೆ. ರಾಮಣ್ಣ,**
ಅಧ್ಯಕ್ಷರು,
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು

**P.R. 2316**
**SC - 2**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 470 ಮೈಅಪ್ರಾ 2013, ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್, 2013**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 5ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಹಾಸನ ಜಿಲ್ಲೆ, ಬೇಲೂರು-ಹಳೇಬೀಡು ಸ್ಥಳೀಯ ಯೋಜನಾ ಪ್ರದೇಶಕ್ಕೆ ಹಾಲಿ ಭೂ ಉಪಯೋಗ ನಿರ್ಧರಣಾ ದಿನಾಂಕವನ್ನು 26-06-2013ರಂದು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ. ವಾಸುದೇವರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

**P.R. 2317**
**SC - 50**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 544 ಮೈಅಪ್ರಾ 2013, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್, 2013**

ಲೋಕೋಪಯೋಗಿ ಇಲಾಖೆಯ ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಜ್ಞಾಪನಾ ಪತ್ರ ಸಂಖ್ಯೆ: ಸಿಬಿಎಸ್/96 ಸ.ಇಂ./ಟಿಆರ್‌ಎಫ್/ಇಎಸ್‌ಎ-1/2013-14, ದಿನಾಂಕ: 09-10-2013ರನ್ವಯ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಸ್ಥಳ ನಿಯುಕ್ತಿಗೊಂಡ ಶ್ರೀ ಹೆಚ್.ಎಂ. ಮಹಾದೇವಪ್ಪ, ಸಹಾಯಕ ಅಭಿಯಂತರರು ಹಾಗೂ ಶ್ರೀ ಎಚ್.ಎಸ್. ರಾಜಶೇಖರ್, ಸಹಾಯಕ ಅಭಿಯಂತರರು ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಆದೇಶ ಸಂಖ್ಯೆ : ನಅಇ 371 ಮೈಅಪ್ರಾ 2012, ದಿನಾಂಕ: 29-08-2013ರ ಆದೇಶದಲ್ಲಿ ಹೊಸದಾಗಿ ಸೃಜಿಸಲಾದ ಸಹಾಯಕ ಅಭಿಯಂತರರ ಹುದ್ದೆಯ ಎದುರು ಮರುಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಲೋಕೋಪಯೋಗಿ ಇಲಾಖೆಯ ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಜ್ಞಾಪನಾ ಪತ್ರ ಸಂಖ್ಯೆ: ಸಿಬಿಎಸ್/96 ಸ.ಇಂ./ಟಿಆರ್‌ಎಫ್/ಇಎಸ್‌ಎ-1/2013-14, ದಿನಾಂಕ: 09-10-2013ರನ್ವಯ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಸ್ಥಳ ನಿಯುಕ್ತಿಗೊಂಡ ಶ್ರೀ ಎಚ್.ಎಸ್. ರಾಜಶೇಖರ್, ಸಹಾಯಕ ಅಭಿಯಂತರರು ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಆದೇಶ ಸಂಖ್ಯೆ : ನಅಇ 371 ಮೈಅಪ್ರಾ 2012, ದಿನಾಂಕ: 29-08-2013ರ ಆದೇಶದಲ್ಲಿ ಹೊಸದಾಗಿ ಸೃಜಿಸಲಾದ ಸಹಾಯಕ ಅಭಿಯಂತರರ ಹುದ್ದೆಯ ಎದುರು ಮರುಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ. ವಾಸುದೇವರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

**P.R. 2318**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 545 ಮೈಅಪ್ರಾ 2013, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್, 2013**

ಲೋಕೋಪಯೋಗಿ ಇಲಾಖೆಯ ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಜ್ಞಾಪನಾ ಪತ್ರ ಸಂಖ್ಯೆ: ಸಿಬಿಎಸ್/77/ಕಿ.ಅ./ಟಿಆರ್‌ಎಫ್/ಇಎಸ್‌ಇ/2013-14, ದಿನಾಂಕ: 09-10-2013ರನ್ವಯ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಸ್ಥಳ ನಿಯುಕ್ತಿಗೊಂಡ ಶ್ರೀ ಎಂ. ಡಿ. ಕುಮಾರ್, ಕಿರಿಯ ಅಭಿಯಂತರರು ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಆದೇಶ ಸಂಖ್ಯೆ : ನಅಇ 371 ಮೈಅಪ್ರಾ 2012, ದಿನಾಂಕ: 29-08-2013ರ ಆದೇಶದಲ್ಲಿ ಹೊಸದಾಗಿ ಸೃಜಿಸಲಾದ ಕಿರಿಯ ಅಭಿಯಂತರರ ಹುದ್ದೆಯ ಎದುರು ಮರುಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಲೋಕೋಪಯೋಗಿ ಇಲಾಖೆಯ ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಜ್ಞಾಪನಾ ಪತ್ರ ಸಂಖ್ಯೆ: ಸಿಬಿಎಸ್/77/ಕಿ.ಅ./ಟಿಆರ್‌ಎಫ್/ಇಎಸ್‌ಇ/2013-14, ದಿನಾಂಕ : 09-10-2013ರನ್ವಯ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಸ್ಥಳ

ನಿಯುಕ್ತಿಗೊಂಡ ಶ್ರೀ ಎಂ.ಎಸ್. ಸುರೇಶ, ಕಿರಿಯ ಅಭಿಯಂತರರು ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಆದೇಶ ಸಂಖ್ಯೆ : ನಅಇ 371 ಮೈಅಪ್ರಾ 2012, ದಿನಾಂಕ: 29-08-2013ರ ಆದೇಶದಲ್ಲಿ ಹೊಸದಾಗಿ ಸೃಜಿಸಲಾದ ಕಿರಿಯ ಅಭಿಯಂತರರ ಹುದ್ದೆಯ ಎದುರು ಮರುಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ. ವಾಸುದೇವರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

P.R. 2319

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 189 ಎಂಎಲ್ಆರ್ 2013, ಬೆಂಗಳೂರು, ದಿನಾಂಕ: 08ನೇ ಅಕ್ಟೋಬರ್, 2013**

ಮೈಸೂರು ಮಹಾನಗರ ಪಾಲಿಕೆಯ 16ನೇ ಅವಧಿಯ ಮಹಾಪೌರರ ಹಾಗೂ ಉಪ ಮಹಾಪೌರರ ಚುನಾವಣೆಗೆ ಸಂಬಂಧಿಸಿದಂತೆ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಮತ್ತು ಚುನಾವಣಾಧಿಕಾರಿ, ಮೈಸೂರು ಮಹಾನಗರ ಪಾಲಿಕೆ, ಮೈಸೂರು, ಇವರು ಕರ್ನಾಟಕ ಮಹಾನಗರ ಪಾಲಿಕೆಗಳ (ಚುನಾವಣೆ) ನಿಯಮಗಳು 1979ರಲ್ಲಿ ನಿರ್ದಿಷ್ಟಪಡಿಸಿರುವ ನಮೂನೆ 31ರಲ್ಲಿ ದಿನಾಂಕ: 05-09-2013ರಂದು ಘೋಷಿಸಿರುವ ಅನುಸಾರ ಕರ್ನಾಟಕ ಮಹಾನಗರ ಪಾಲಿಕೆಗಳ ಅಧಿನಿಯಮ 1976ರ ಕಲಂ 32ರನ್ವಯ ಈ ಕೆಳಕಂಡಂತೆ ಸರ್ಕಾರವು ಅಧಿಸೂಚಿಸಿದೆ.

**ಮೈಸೂರು ಮಹಾನಗರಪಾಲಿಕೆಯ ಮಹಾಪೌರರ ಚುನಾವಣೆ**
**(16ನೇ ಅವಧಿ)**

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು | ಪಡೆದ ಸಿಂಧುವಾದ ಮತಗಳು |
|---|---|---|
| 1 | ಶ್ರೀಮತಿ ಮಂಜುಳ ಮಾನಸ | 29 |
| 2 | ಶ್ರೀಮತಿ ರಾಜೇಶ್ವರಿ ಎನ್.ಎಂ. | 39 |

1. ಪಡೆದ ಸಿಂಧುವಾದ ಮತಗಳ ಒಟ್ಟು ಸಂಖ್ಯೆ : 68
2. ತಿರಸ್ಕೃತವಾದ ಮತಗಳ ಒಟ್ಟು ಸಂಖ್ಯೆ : 00
3. ತಟಸ್ಥವಾದ ಮತಗಳ ಒಟ್ಟು ಸಂಖ್ಯೆ : 05

ಶ್ರೀಮತಿ ರಾಜೇಶ್ವರಿ ಎನ್.ಎಂ. ಕೋಂ ಟಿ. ಸೋಮು, ನಂ. 2279/5, 6ನೇ ಮುಖ್ಯರಸ್ತೆ, ದೇವಸ್ಥಾನದ ರಸ್ತೆ, ವಿನಾಯಕನಗರ, ಮೈಸೂರು-570 012 ಇವರು ಮಹಾಪೌರರ ಸ್ಥಾನಕ್ಕೆ ಬಹುಮತದಿಂದ ಹಾಗೂ ಕ್ರಮಬದ್ಧವಾಗಿ ಚುನಾಯಿತರಾಗಿದ್ದಾರೆ.

**ಮೈಸೂರು ಮಹಾನಗರಪಾಲಿಕೆಯ ಉಪ ಮಹಾಪೌರರ ಚುನಾವಣೆ**
**(16ನೇ ಅವಧಿ)**

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು | ಪಡೆದ ಸಿಂಧುವಾದ ಮತಗಳು |
|---|---|---|
| 1 | ಶ್ರೀಮತಿ ಬಿ. ಭಾಗ್ಯವತಿ | 32 |
| 2 | ಶ್ರೀ ವಿ. ಶೈಲೇಂದ್ರ | 39 |
| 3 | ಶ್ರೀ ಎಸ್. ಸ್ವಾಮಿ | 02 |

1. ಪಡೆದ ಸಿಂಧುವಾದ ಮತಗಳ ಒಟ್ಟು ಸಂಖ್ಯೆ : 73
2. ತಿರಸ್ಕೃತವಾದ ಮತಗಳ ಒಟ್ಟು ಸಂಖ್ಯೆ : 00
3. ತಟಸ್ಥವಾದ ಮತಗಳ ಒಟ್ಟು ಸಂಖ್ಯೆ : 00

ಶ್ರೀ ವಿ. ಶೈಲೇಂದ್ರ, ಬಿನ್ ಪಿ. ವೆಂಟರಾಜು, 2313, ಸಿ.ಹೆಚ್. 40, 11ನೇ ಕ್ರಾಸ್, ಅಶೋಕಪುರಂ, ಮೈಸೂರು ಇವರು ಉಪ ಮಹಾಪೌರರ ಸ್ಥಾನಕ್ಕೆ ಬಹುಮತದಿಂದ ಹಾಗೂ ಕ್ರಮಬದ್ಧವಾಗಿ ಚುನಾಯಿತರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿದ್ದಿಕ್ ಪಾಷ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

P.R. 2320
SC - 50

## ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು

**ವಿಷಯ :** ಶ್ರೀಮತಿ ಸುಲೋಚನಾ ಶೆಟ್ಟಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಜಾವೂರು, ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ, ಇವರ ಅನಧಿಕೃತ ಗೈರು ಹಾಜರಿ ಹಾಗೂ ಕರ್ತವ್ಯಲೋಪ ಆರೋಪದ ಬಗ್ಗೆ ಶಿಸ್ತುಕ್ರಮ- ಅಂತಿಮ ಆದೇಶ

**ಓದಲಾಗಿದೆ:**
1) ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಕಾರವಾರ ಇವರ ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ : ಸಿಬ್ಬಂದಿ(2)ಸಿಆರ್/08/03-04, ದಿನಾಂಕ: 31-05-2003
2) ನಿರ್ದೇಶನಾಲಯದ ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ: ಡಿಪಿಎನ್(1)ಸಿಆರ್/2/09-10, ದಿನಾಂಕ: 01-06-2009
3) ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಧಾರವಾಡ ಇವರ ಪತ್ರ ದಿನಾಂಕ: 04-06-2009
4) ನಿರ್ದೇಶನಾಲಯದ ಪತ್ರ ದಿನಾಂಕ: 24-09-2012 (ದೋಷಾರೋಪಣಾ ಪಟ್ಟಿ)
5) ನೌಕರರ ರಕ್ಷಣಾ ಹೇಳಿಕೆ ದಿನಾಂಕ: 04-10-2012
6) ನಿರ್ದೇಶನಾಲಯದ ಸಮ ಸಂಖ್ಯೆಯ ಪತ್ರ ದಿನಾಂಕ: 01-02-2013 (ಇಲಾಖಾ ವಿಚಾರಣಾಧಿಕಾರಿಗಳ ನೇಮಕ)
7) ವಿಚಾರಣಾಧಿಕಾರಿಗಳ ವರದಿ ಪತ್ರ ಸಂಖ್ಯೆ: ಮುಜಾಅ/ಜಾಕೋ/ಎನ್‌ಜಿ-43/12-13, ದಿನಾಂಕ: 27-05-2013
8) ನಿರ್ದೇಶನಾಲಯದ 2ನೇ ಸೂಚನಾ ಸಮ ಸಂಖ್ಯೆ ಪತ್ರ ದಿನಾಂಕ: 09-07-2013
9) 2ನೇ ಸೂಚನಾ ಪತ್ರಕ್ಕೆ ನೌಕರರ ಲಿಖಿತ ಹೇಳಿಕೆ ದಿನಾಂಕ: 01-08-2013

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿ ಶ್ರೀಮತಿ ಸುಲೋಚನಾ ಶೆಟ್ಟಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಜಾವೂರು, ನವಲಗುಂದ, ತಾ॥ ಧಾರವಾಡ ಜಿಲ್ಲೆ, ಇವರು ಈ ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ/ಘಟಕ, ಅಂಕೋಲಾ ಕಾರವಾರ ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಜಿಲ್ಲಾ ಮಟ್ಟದ ವರ್ಗಾವಣಾ ಪ್ರಾಧಿಕಾರ ಕಾರವಾರ ಇವರು ನೌಕರರನ್ನು ದಿನಾಂಕ: 31-05-2003ರ ಆದೇಶದಲ್ಲಿ ವರ್ಗಾವಣೆ ಮಾಡಿ ಪ್ರಾಥಮಿಕ ಆರೋಗ್ಯ ಕೇಂದ್ರ, ಕ್ಯಾಸರಲಾಕ್ ಜೋಯಿಡಾ ತಾ॥ ಕಾರವಾರ ಜಿಲ್ಲೆ ಇಲ್ಲಿಗೆ ನೇಮಿಸಲಾಗಿತ್ತು. ನೌಕರರನ್ನು ಕರ್ತವ್ಯದಿಂದ ಬಿಡುಗಡೆ ಮಾಡಿ ವರ್ಗಾವಣೆ ಮೇಲೆ ನೇಮಿಸಿದ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗುವಂತೆ ವೈದ್ಯಾಧಿಕಾರಿಗಳು ತಾಲ್ಲೂಕು ಆಸ್ಪತ್ರೆ, ಅಂಕೋಲಾ ಇವರು ತಮ್ಮ ಆಜ್ಞಾ ಪತ್ರ ದಿನಾಂಕ: 05-07-2003ರಲ್ಲಿ ಕರ್ತವ್ಯದಿಂದ ಬಿಡುಗಡೆ ಮಾಡಿರುತ್ತಾರೆ. ವರ್ಗಾವಣೆ ಮಾಡಿ ನೇಮಿಸಿದ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗದೇ ಅನಧಿಕೃತ ಗೈರು ಹಾಜರಿಯಲ್ಲಿ ಉಳಿದು ಆದೇಶ ಮಾರ್ಪಾಡಿಸಲು ರಾಜಕೀಯ ಒತ್ತಡ ತಂದು ಪದೇ ಪದೇ ಮೇಲಾಧಿಕಾರಿಗಳಿಗೆ ಮನವಿಗಳನ್ನು ಸಲ್ಲಿಸಿ, ಆದೇಶ ಮಾರ್ಪಾಡು ಆಗದ ಕಾರಣ ನಿರ್ದೇಶಕರ ಸಹಿಯನ್ನು ಪೋರ್ಜರಿ ಮಾಡಿ ವರ್ಗಾವಣೆ ರದ್ದುಪಡಿಸಿದಂತೆ ಆದೇಶವನ್ನು ಸೃಷ್ಟಿಸಿ, ಕರ್ತವ್ಯಕ್ಕೆ ಹಾಜರುಪಡಿಸಿಕೊಳ್ಳುವಂತೆ ತಪ್ಪಿದಲ್ಲಿ ನಿಮ್ಮ ವಿರುದ್ಧ ಧರಣಿ ಸತ್ಯಾಗ್ರಹವನ್ನು ಹೂಡುವುದಾಗಿ ಬೆದರಿಕೆ ಪತ್ರ ನೀಡಿದ ಮೇರೆಗೆ ನಿರ್ದೇಶನಾಲಯದಿಂದ ನೌಕರರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ದಾಖಲಿಸುವಂತೆ ಸೂಚಿಸಲಾಗಿತ್ತು. ನೌಕರರು ದೀರ್ಘಕಾಲದ ಅನಧಿಕೃತ ಗೈರು ಹಾಜರಿಯಲ್ಲಿ ಮುಂದುವರೆದಿದ್ದು, ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡಲು ಕೋರಿದ ಮೇರೆಗೆ ಮೇಲೆ ಓದಲಾದ (2)ರಲ್ಲಿ ಇಲಾಖಾ ವಿಚಾರಣೆ ಬಾಕಿ ಇರಿಸಿ ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡಿ ಪ್ರಾಥಮಿಕ ಆರೋಗ್ಯ ಕೇಂದ್ರ ಜಾವೂರು ಇಲ್ಲಿಗೆ ಸ್ಥಳ ನೇಮಕಾತಿ ಮಾಡಲಾಗಿತ್ತು. ಅದರಂತೆ ನೌಕರರು ದಿನಾಂಕ: 05-06-2009ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಮೇಲೆ ಓದಲಾದ (4)ರಲ್ಲಿ ನೌಕರರ ಅನಧಿಕೃತ ಗೈರು ಹಾಜರಿ ಬಗ್ಗೆ ದೋಷಾರೋಪಣಾ ಪಟ್ಟಿ ಜಾರಿ ಮಾಡಲಾಗಿತ್ತು. ಮೇಲೆ ಓದಲಾದ (5)ರಲ್ಲಿ ನೌಕರರು ಲಿಖಿತ ಹೇಳಿಕೆ ಸಲ್ಲಿಸಿ, ಇವರ ಮೇಲಿನ ಆರೋಪವನ್ನು ಒಪ್ಪಿಕೊಂಡಿರುವುದಿಲ್ಲ. ಆದ್ದರಿಂದ ಮೇಲೆ ಓದಲಾದ (6)ರಲ್ಲಿ ಇಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸಲು ವಿಚಾರಣಾಧಿಕಾರಿಗಳನ್ನು ನೇಮಿಸಲಾಗಿತ್ತು. ಮೇಲೆ ಓದಲಾದ (7)ರಲ್ಲಿ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ವರದಿ ಸಲ್ಲಿಸಿರುತ್ತಾರೆ. ವರದಿಯಲ್ಲಿ ದಿನಾಂಕ: 06-07-2003ರಿಂದ ದಿನಾಂಕ: 04-06-2009ರವರೆಗೆ ಅನಧಿಕೃತ ಗೈರು ಹಾಜರಿ ಆರೋಪ, ವರ್ಗಾವಣೆಯನ್ನು ರದ್ದುಪಡಿಸಿದ ಖೊಟ್ಟಿ ಆದೇಶವನ್ನು ಸೃಷ್ಟಿಸಿದ ಆರೋಪ ಮತ್ತು ಮೇಲಾಧಿಕಾರಿಗಳಿಗೆ ಕರ್ತವ್ಯಕ್ಕೆ ಹಾಜರು ಪಡಿಸಿಕೊಳ್ಳದೆ ಇದ್ದಲ್ಲಿ ಸತ್ಯಾಗ್ರಹ ನಡೆಸುವುದಾಗಿ ಎಚ್ಚರಿಕೆ ನೀಡಿದ ಆರೋಪ ಹಾಗೂ ವರ್ಗಾವಣೆ ರದ್ದು ಪಡಿಸಿದ ಖೊಟ್ಟಿ ಆದೇಶವು ನಿರ್ದೇಶನಾಲಯದಿಂದ ಬಂದಿರುವುದಾಗಿ ಸುಳ್ಳು ಮಾಹಿತಿ ನೀಡುತ್ತಿರುವ ಆರೋಪಗಳು ಸಾಬೀತಾಗಿರುತ್ತದೆ ಎಂದು ಅಭಿಪ್ರಾಯಪಟ್ಟಿರುತ್ತಾರೆ. ಮೇಲೆ ಓದಲಾದ (8)ರಲ್ಲಿ 2ನೇ ಸೂಚನಾ ಪತ್ರವನ್ನು ನೌಕರರಿಗೆ ಜಾರಿ ಮಾಡಲಾಗಿತ್ತು. ಮೇಲೆ ಓದಲಾದ (9)ರಲ್ಲಿ ನೌಕರರು ವಿಚಾರಣಾ ವರದಿಯಲ್ಲಿ ಸಾಬೀತಾಗಿರುವ ಆರೋಪಗಳನ್ನು ನಿರಾಕರಿಸಿ ವಿಚಾರಣೆ ವರದಿ ಸಮರ್ಪಕವಾಗಿಲ್ಲ ಹಾಗೂ ಖೊಟ್ಟಿ ಆದೇಶಕ್ಕೆ ಸಹಿ ಮಾಡಿದ ಸಂಬಂಧಿತ ಅಧಿಕಾರಿಗಳನ್ನು ಹಾಗೂ ವಿಭಾಗದ ವಿಷಯ ನಿರ್ವಾಹಕರನ್ನು ವಿಚಾರಣೆಗೆ ಕರೆಸಿ ವಿಚಾರಣೆ ಮಾಡಿಲ್ಲವಾದ್ದರಿಂದ ಈ ವಿಚಾರಣೆ ಅಪೂರ್ಣವಾಗಿರುತ್ತದೆ ಎಂದು ಲಿಖಿತ ಹೇಳಿಕೆ ಸಲ್ಲಿಸಿರುತ್ತಾರೆ. ಆದ್ದರಿಂದ, ಪ್ರಸ್ತಾವನೆಯಲ್ಲಿ ವಿವರಿಸಿದಂತೆ ವಿಚಾರಣಾಧಿಕಾರಿಗಳ ವರದಿ ಹಾಗೂ ನೌಕರರ ಹೇಳಿಕೆಯನ್ನು ಪರಿಶೀಲಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಪಿಎನ್(1)ಸಿಆರ್-02/09-10, ದಿನಾಂಕ: 10ನೇ ಅಕ್ಟೋಬರ್, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು) 1957ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿ.ಬಿ. ಪಾಟೀಲ್, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಆದ ನಾನು ಶ್ರೀಮತಿ ಸುಲೋಚನಾ ಶೆಟ್ಟಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಜಾವೂರು, ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ, ಇವರು ದಿನಾಂಕ: 06-07-2003ರಿಂದ ದಿನಾಂಕ: 04-06-2009ರವರೆಗೆ ಸುಮಾರು 06 ವರ್ಷಗಳ ದೀರ್ಘ ಕಾಲ ಅನಧಿಕೃತ ಗೈರು ಹಾಜರಿ ಆರೋಪ ವಿಚಾರಣಾ ವರದಿಯಲ್ಲಿ ಸಾಬೀತಾಗಿರುವುದರಿಂದ ಮತ್ತು ನಕಲಿ ವರ್ಗಾವಣೆ ಆದೇಶ ಸೃಷ್ಟಿಸಿರುವುದು ಸಾಬೀತಾಗಿರುವುದನ್ನು ಗಂಭೀರವಾಗಿ ಪರಿಗಣಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ರೀತ್ಯಾ ಸರ್ಕಾರಿ ಸೇವೆಗೆ ಪುನಃ ನೇಮಕಾತಿ ಹೊಂದಲು ಅನರ್ಹವಾಗುವ ರೀತಿ ಸಿ.ಸಿ.ಎ. 8 (viii) ನಿಯಮ ರ ಮೇರೆಗೆ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿದ್ದೇನೆ.

P.R. 2327
SC - 5

**ಆಯುಕ್ತರು,**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು

**ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಕಾರ್ಯಾಲಯ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.**

**ಪ್ರಪತ್ರ–2**

[ 12(2)ನೇ ನಿಯಮವನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ:ಇಎಲ್‌ಎನ್(2)ಸಿಆರ್.11/2013–14, ದಿನಾಂಕ : 21/11/2013.**

ಚಿಕ್ಕಬಳ್ಳಾಪುರ ಜಿಲ್ಲೆ. ಶಿಡ್ಲಘಟ್ಟ ತಾಲ್ಲೂಕಿನ ವ್ಯಾಪ್ತಿಯ. 1–ಭಕ್ತರಹಳ್ಳಿ, 2–ಮಾಳಮಾಚನಹಳ್ಳಿ, 3–ಹೊಸಪೇಟೆ, 4–.ನಾಗಮಂಗಲ ಗ್ರಾಮ ಪಂಚಾಯಿತಿಗಳಿಗೆ ಅವಧಿ ಮುಕ್ತಾಯವಾಗಲಿದ್ದು, ಸದರಿ ಗ್ರಾಮಪಂಚಾಯಿತಿಗಳಿಗೆ ಚುನಾಯಿತ ಸದಸ್ಯರ ಸ್ಥಾನಗಳನ್ನು ಭರ್ತಿ ಮಾಡಲು ಚುನಾವಣೆ ನಡೆಸಬೇಕಾಗಿರುವುದರಿಂದ ;

ಕರ್ನಾಟಕ ಪಂಚಾಯತ್‌ರಾಜ್ (ಚುನಾವಣೆ ನಡೆಸುವ) ನಿಯಮಗಳು, 1993ರ 12(2)ನೇ ನಿಯಮಕ್ಕನುಸಾರವಾಗಿ ಡಾ॥ ವಿಶಾಲ್. ಆರ್. ಭಾ.ಆ.ಸೇ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಆದ ನಾನು ಸದರಿ ಚುನಾವಣೆಗೆ ಸಂಬಂಧಿಸಿದಂತೆ ಈ ಕೆಳಕಂಡ ಕಾರ್ಯಕ್ರಮದ ವೇಳಾಪಟ್ಟಿಯನ್ನು ನಿಗದಿಪಡಿಸಿದ್ದೇನೆ.

| ಕ್ರ.ಸಂ | ಚುನಾವಣಾ ಚಟುವಟಿಕೆ | ದಿನಾಂಕ |
|---|---|---|
| 1. | ನಾಮಪತ್ರವನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ. | 28.11.2013 ಗುರುವಾರ |
| 2. | ನಾಮಪತ್ರವನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 29.11.2013 ಶುಕ್ರವಾರ |
| 3. | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ. | 02.12.2013 ಸೋಮವಾರ |
| 4. | ಮತದಾನ ಅವಶ್ಯವಿದ್ದರೆ,ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ. | 08.12.2013 ಭಾನುವಾರ |
| 5. | ಮರು ಮತದಾನ ಅವಶ್ಯವಿದ್ದರೆ,ಮರು ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ. (ಮತದಾನದ ಸಮಯ ಬೆಳಿಗ್ಗೆ 7.00ಗಂಟೆಯಿಂದ ಸಂಜೆ 5.00 ಗಂಟೆವರೆಗೆ) | 10.12.2013 ಮಂಗಳವಾರ |
| 6. | ಮತಗಳ ಎಣಿಕೆ ಬೆಳಗ್ಗೆ 8.00 ಗಂಟೆಯಿಂದ (ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿ) | 11.12.2013 ಬುಧುವಾರ |
| 7. | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ. | 11.12.2013 ಬುಧುವಾರ |

**ಅನುಬಂಧ**

ಚಿಕ್ಕಬಳ್ಳಾಪುರ ಜಿಲ್ಲಾ ವ್ಯಾಪ್ತಿಯ ಗ್ರಾಮಪಂಚಾಯಿತಿಗಳಿಗೆ ಅವಧಿ ಮುಕ್ತಾಯವಾಗಲಿದ್ದು, ಸದರಿ ಗ್ರಾಮಪಂಚಾಯಿತಿಗಳಿಗೆ ಚುನಾಯಿತ ಸದಸ್ಯರ ಸ್ಥಾನಗಳನ್ನು ಭರ್ತಿ ಮಾಡಲು ಚುನಾವಣೆ ನಡೆಸಬೇಕಾಗಿರುವ ಗ್ರಾಮಪಂಚಾಯಿತಿಗಳ ವಿವರ.

**ತಾಲ್ಲೂಕಿನ ಹೆಸರು : ಶಿಡ್ಲಘಟ್ಟ.**

| ಕ್ರ.ಸಂ | ಗ್ರಾಮಪಂಚಾಯಿತಿ ಹೆಸರು | ಒಟ್ಟು ಸದಸ್ಯರ ಸಂಖ್ಯೆ. |
|---|---|---|
| 01 | ಭಕ್ತರಹಳ್ಳಿ | 10 |
| 02 | ಮಾಳಮಾಚನಹಳ್ಳಿ | 14 |
| 03 | ಹೊಸಪೇಟೆ | 17 |
| 04 | ನಾಗಮಂಗಲ | 07 |

**ಡಾ॥ ವಿಶಾಲ್.ಆರ್.ಭಾ.ಆ.ಸೇ,**

ಜಿಲ್ಲಾಧಿಕಾರಿಗಳು,

ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು. ಚಿಕ್ಕಬಳ್ಳಾಪುರ ಜಿಲ್ಲೆ

**P.R. 2398**

**SC - 50**

**IN THE COURT OF 2ND ADDITIONAL CHIEF METROPOLITAN MEGISTRATE, BENGALURU CITY**

**Notification No. 261/2013, Dated 13th September 2013**

It is hereby notified for the information of the public that the unclaimed vehicles mentioned under are in the custody of the Basavanagudi Police Station, Bangalore City, as unclaimed shall be confiscated to the Government, and disposed of according to law of not claimed by the owner with proof of ownership within one month from the date of the publication of notification.

**Annexure-1**

| SL.No | Cr.No | Section of law | PF No | Type of vehicle | Reg. No | Chassis No | Eng. No |
|---|---|---|---|---|---|---|---|
| 1 | 263/08 | 332 IPC | 117/08 | YAMAHA RXZ | KA-04,EE-4400 | - | - |
| 2 | C.MISS NO 393/12 | - | 97/12 | T.V.S APACHI | TN-10,V-9803 | MD634LE5682K01854 | 0E5K82001850 |
| 3 | C.MISS NO 400/12 | - | 100/12 | HERO HONDA SPLENDER | GJ-01,CQ-5108 | 02420F01973 | 02418E09926 |
| 4 | C.MISS NO 836/12 | - | 177/12 | T.V.S APACHI | KA-03,HD-1037 | MD634KE4X82K19713 | 0E4K82121167 |
| 5 | C.MISS 252/09 | - | 57/09 | TVS XL SUPER | KA-05,ED-3945 | P1007F303499 | - |
| 6 | C.MISS NO 459/13 | - | 97/13 | SUZUKI | KA-02,Y-2854 | 7906F343531 | 906M392543 |
| 7 | C.MISS NO 459/13 | - | 97/13 | BAJAJ WAVE | KA-01,U-3154 | - | NOE-UE-005461 |
| 8 | C.MISS NO 459/13 | - | 97/13 | HONDA DIO | KA-05,HD-6102 | ME4JF112J78051975 | JF11E6059320 |
| 9 | C.MISS NO 459/13 | - | 97/13 | KINETIC HONDA | KA-04,Q-2502 | - | 090199 |
| 10 | C.MISS NO 459/13 | - | 97/13 | HONDA DIO | - | - | JF11E6041345 |
| 11 | C.MISS NO 469/13 | - | 99/13 | MARUTHI 800 CAR | KA-02,N-1002 | SB308-N-1039519 | F8B1N1371933 |
| 12 | C.MISS NO 470/13 | - | 100/13 | MARUTHI 800 CAR | KA-02,P-8430 | SB308-N-227790 | F8B1N309811 |
| 13 | C.MISS NO 459/13 | - | 97/13 | KINETIC HONDA | KA-03,Y-7797 | - | NIE-RM017630 |
| 14 | C.MISS NO 459/13 | - | 97/13 | TVS | CAR-9512 | 3607F105454 | 3607M082119 |
| 15 | C.MISS NO 459/13 | - | 97/13 | TVS XL SUPER | | MD621BD1471K43604 | - |
| 16 | C.MISS NO 461/13 | - | 98/13 | BAJAJ CT-100 | KA-42,E-1310 | DUFBLP34431 | DUMBLF57497 |
| 17 | C.MISS NO 461/13 | - | 98/13 | HONDA ACTIVA | KA-04,EC-8835 | - | JF08E0500146 |
| 18 | C.MISS NO 461/13 | - | 98/13 | KINETIC STYLE | KA-05,EC-1001 | - | AM30010143 |
| 19 | C.MISS NO 461/13 | - | 98/13 | BAJAJ | KA-02,EG-6706 | 177063 | E0QE180798 |
| 20 | C.MISS NO 461/13 | - | 98/13 | TVS XL SUPER | KA-04,X-4806 | P1004F251476 | - |
| 21 | C.MISS NO 461/13 | - | 98/13 | KINETIC HONDA | KA-05,EE-887 | - | NIE-SJ-114141 |

**P.R. 2216**

**SC- 5**

**2ND ADDITIONAL CHIEF METROPOLITAN MEGISTRATE, BENGALURU CITY**